# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 787 (936)
ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 20.09.2021
ಉತ್ತರಿಸುವವರು : ಅರಣ್ಯ ಹಾಗೂ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಒಟ್ಟು ಅರಣ್ಯ ಪ್ರದೇಶವೆಷ್ಟು; ಯಾವ್ಯಾವ ರೀತಿಯ ಅರಣ್ಯ ಪ್ರದೇಶಗಳೆಂದು ವರ್ಗೀಕರಿಸಲಾಗಿದೆ; (ವರ್ಗೀಕರಣವಾರು ವಿಸ್ತೀರ್ಣದ ಮಾಹಿತಿ ನೀಡುವುದು) | ರಾಜ್ಯದಲ್ಲಿರುವ ಒಟ್ಟು ಅರಣ್ಯ ಪ್ರದೇಶಗಳ ವಿವರ ಈ ಕೆಳಕಂಡಂತಿದೆ: |

| ಕ್ರ. ಸಂ. | ಅರಣ್ಯ ಪ್ರದೇಶದ ವರ್ಗೀಕರಣ | ವಿಸ್ತೀರ್ಣವಾರು (ಹೆ. ಗಳಲ್ಲಿ) |
|---|---|---|
| 1 | ಮೀಸಲು ಅರಣ್ಯ | 29,98,761 |
| 2 | ರಕ್ಷಿತ ಅರಣ್ಯ | 2,42,533 |
| 3 | ಗ್ರಾಮ ಅರಣ್ಯ | 8,135 |
| 4 | ಖಾಸಗಿ ಅರಣ್ಯ | 5,246 |
| 5 | ವರ್ಗೀಕರಿಸದ ಅರಣ್ಯ | 9,64,484 |
| | ಒಟ್ಟು | **42,19,163** |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ವರ್ಗೀಕರಣಕ್ಕೆ ನಿರ್ಧರಿಸಿರುವ ಮಾನದಂಡಗಳೇನು; ಇವುಗಳ ಗಡಿಯನ್ನು ಹೇಗೆ ನಿರ್ಧರಿಸಲಾಗುತ್ತದೆ? | ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ-17 ರಂತೆ ಮೀಸಲು ಅರಣ್ಯ, ಕಲಂ-29ರಂತೆ ಗ್ರಾಮ ಅರಣ್ಯ ಮತ್ತು ಕಲಂ-33 ರಂತೆ ರಕ್ಷಿತ ಅರಣ್ಯ ಎಂದು ಅಧಿಸೂಚಿಸಲ್ಪಡುತ್ತದೆ. ಆಯಾ ಅರಣ್ಯ ಪ್ರದೇಶಗಳನ್ನು ಅಧಿಸೂಚಿಸುವ ಸಂದರ್ಭದಲ್ಲಿ ಮೋಜಣಿ ನಡೆಸಿ, ಗಡಿಗಳನ್ನು ಗುರುತಿಸಿ, ಅಧಿಸೂಚನೆಯಲ್ಲಿ (Forest Notification) ವಿವರಿಸಲ್ಪಟ್ಟಿರುತ್ತದೆ. |
| ಇ) | ಅರಣ್ಯ ಪ್ರದೇಶಗಳಿಂದ ಎಷ್ಟು ಅಂತರದಲ್ಲಿ ಗಣಿಗಾರಿಕೆ ನಡೆಸಬಹುದು; ಯಾವ್ಯಾವ ರೀತಿಯ ಗಣಿಗಾರಿಕೆ ನಡೆಸಬಹುದು; ಇದಕ್ಕೆ ಅರಣ್ಯ ಇಲಾಖೆಯವರು ವಿಧಿಸಿರುವ ಷರತ್ತುಗಳ ವಿವರ ನೀಡುವುದು | ರಾಷ್ಟ್ರೀಯ ಉದ್ಯಾನವನ ಹಾಗೂ ವನ್ಯಜೀವಿಯ ಅಭಯಾರಣ್ಯಗಳ ಸುತ್ತಮುತ್ತಲು Eco-Sensitive zone (ESZ) ಗಳಲ್ಲಿ ಮತ್ತು ಬಫರ್ ಜೋನ್ ಪ್ರದೇಶಗಳಲ್ಲಿ ಗಣಿಗಾರಿಕೆಯನ್ನು ನಿಷೇಧಿಸಿದೆ. ಹಾಗೆಯೇ, ಮೀಸಲು ಅರಣ್ಯದ ಗಡಿಯಿಂದ 100 ಮೀಟರ್ ಒಳಗೆ ಗಣಿಗಾರಿಕೆಯನ್ನು ನಡೆಸಲು ಅರಣ್ಯ ಇಲಾಖೆಯಿಂದ ಸಹಮತಿ ಪಡೆಯಬೇಕಾಗಿದೆ.<br><br>ಪ್ರತಿ ಗಣಿಗಾರಿಕೆಯ ಯೋಜನೆಯನ್ನು ಭಾರತೀಯ ಬ್ಯೂರೋ ಗಣಿ (IBM) ಅನುಮೋದಿಸುತ್ತದೆ. ಗಣಿ ಮಾಲೀಕರು ಇದನ್ನು ಅನುಸರಿಸಬೇಕಾಗುತ್ತದೆ. ಅದರಂತೆ ಇದನ್ನು ಭಾರತೀಯ ಬ್ಯೂರೋ ಗಣಿ ಪ್ರಾಧಿಕಾರವು ಮೇಲ್ವಿಚಾರಣೆ ಮಾಡುತ್ತದೆ.<br><br>ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆ ನಡೆಸಲು 1980ರ ಅರಣ್ಯ (ಸಂರಕ್ಷಣೆ) ಕಾಯ್ದೆ ಅಡಿಯಲ್ಲಿ ಕೇಂದ್ರ ಸರ್ಕಾರದ ಪೂರ್ವಾನುಮೋದನೆ ಪಡೆಯಬೇಕಾಗಿರುತ್ತದೆ. ಈ ಪೂರ್ವಾನುಮೋದನೆ ಅನ್ವಯ ರಾಜ್ಯ ಸರ್ಕಾರವು ಗಣಿಗಾರಿಕೆಗೆ ಮಂಜೂರಾತಿ ನೀಡುತ್ತದೆ ಹಾಗೂ ಪೂರ್ವಾನುಮೋದನೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವಿಧಿಸುವ ಷರತ್ತುಗಳನ್ನು ಗಣಿ ಗುತ್ತಿಗೆದಾರರು ಪಾಲಿಸಬೇಕಾಗುತ್ತದೆ. |

| | | |
|---|---|---|
| ಈ) | ಕೆಲವೊಂದು ಕಂದಾಯ ಭೂಮಿಗಳನ್ನು ಅರಣ್ಯ ಭೂಮಿಗಳೆಂದು ದಾಖಲಾಗಿರುವುದು ನಿಜವೇ; ಹಾಗಿದ್ದಲ್ಲಿ ಅವುಗಳ ವಿವರ ನೀಡುವುದು; ಈ ರೀತಿ ದಾಖಲಾಗಲು ಕಾರಣಗಳೇನು; ಸರಿಪಡಿಸಲು ಸರ್ಕಾರ ಕೈ ಗೊಂಡಿರುವ ಕ್ರಮಗಳೇನು; | ಬಂದಿದೆ<br>ಅಧಿಸೂಚಿತ ಅರಣ್ಯ ಪ್ರದೇಶಗಳನ್ನು ಹೊರತುಪಡಿಸಿ ಕೆಲವೊಂದು ಇತರೆ ಸರ್ಕಾರಿ ಭೂಮಿಗಳನ್ನು ಕಂದಾಯ ಇಲಾಖೆಯ ದಾಖಲೆಗಳಲ್ಲಿ 'ಅರಣ್ಯ' ಭೂಮಿ ಎಂದು ದಾಖಲಾಗಿರುತ್ತದೆ. ಇವುಗಳ ಪೂರ್ಣ ವಿವರಗಳನ್ನು ಕಂದಾಯ ಇಲಾಖೆಯಿಂದ ಪಡೆಯಬೇಕಿರುತ್ತದೆ. ಕಂದಾಯ ಇಲಾಖೆಯಿಂದ ಮಾಹಿತಿ ಪಡೆದು ಒದಗಿಸಲು ಒಂದು ವಾರದ ಕಾಲಾವಕಾಶ ಕೋರಿದೆ. |
| ಉ) | ಕೆಲವೊಂದು ಕಂದಾಯ ಭೂಮಿಗಳನ್ನು ನಿರ್ಧರಿಸಿ ರೈತರನ್ನು ಒಕ್ಕಲೆಬ್ಬಿಸುತ್ತಿರುವುದು ನಿಜವೇ; ಇದಕ್ಕೆ ಕಾರಣಗಳೇನು; (ವಿವರ ನೀಡುವುದು) ಸರಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಈ ವಿಷಯವು ಅರಣ್ಯ ಇಲಾಖೆಯ ವ್ಯಾಪ್ತಿಗೆ ಇರುವುದಿಲ್ಲ. ಈ ಉಪ ಪ್ರಶ್ನೆಗೆ ಕಂದಾಯ ಇಲಾಖೆಯಿಂದ ಮಾಹಿತಿ ಪಡೆಯಬೇಕಿರುತ್ತದೆ. ಕಂದಾಯ ಇಲಾಖೆಯಿಂದ ಮಾಹಿತಿ ಪಡೆದು ಒದಗಿಸಲು ಒಂದು ವಾರದ ಕಾಲಾವಕಾಶ ಕೋರಿದೆ. |

ಸಂಖ್ಯೆ: ಅಪಜೀ 124 ಎಫ್‌ಎಫ್‌ 2021

(ಉಮೇಶ್ ವಿ. ಕತ್ತಿ)
ಅರಣ್ಯ ಹಾಗೂ ಆಹಾರ, ನಾಗರೀಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು